**ಬೋರ್ಡ್ ಪರೀಕ್ಷೆ: ಒಂದು ದಮನಕಾರಿ ಮತ್ತು ಪ್ರತಿಗಾಮಿ ಹೆಜ್ಜೆ**

**–ಮುರಾರೀ ಝಾ**

**ದೇಶದ ನೀತಿಗೆ ಸಂಬಂಧಿಸಿದ ದಾಖಲೆಗಳಲ್ಲಿ ಸಮಗ್ರ ಪರೀಕ್ಷಾ ಪದ್ಧತಿಯ ಮೇಲೆ ಆಳವಾಗಿ ವಿಚಾರ ಮಾಡುವುದರ ಕುರಿತು ಹೆಚ್ಚು ಒತ್ತು ನೀಡಲಾಗುತ್ತಿದೆ. ಇದು ಮೊದಲಿನಿಂದಲೂ ಟೀಕೆಯ ವಿಷಯವಾಗಿದೆ. ಹತ್ತನೇ ಮತ್ತು ಹನ್ನೆರಡನೇ ತರಗತಿಯ ಕೊನೆಯಲ್ಲಿ ನಡೆಸಲಾಗುವ ಈಗಿನ ಪಾಠವನ್ನಾಧರಿಸಿದ ಮತ್ತು ಪ್ರಶ್ನೋತ್ತರ ಮಾದರಿಯ ಪರೀಕ್ಷೆಯ ವಿಧಾನವನ್ನು ಸಮೀಕ್ಷೆಗೆ ಒಳಪಡಿಸಿ ಬದಲಿಸಬೇಕು. ಏಕೆಂದರೆ ಇದರಿಂದ ಒತ್ತಡ ಹೆಚ್ಚುವದಲ್ಲದೇ ರೂಢಿಗತವಾದ ಅಧ್ಯಯನಕ್ಕೆ ಹೆಚ್ಚು ಪ್ರೋತ್ಸಾಹ ದೊರೆತು ಬಿಡುತ್ತದೆ ಎಂದು 'ಹೊರೆಯಾಗದ ಶಿಕ್ಷಣ'ದಲ್ಲಿ ವಿವರಿಸಲಾಗಿದೆ. ಆದರೂ ಈ ಹಿಂದೆ ಹತ್ತನೇ ತರಗತಿಗೆ ಸಿಬಿಎಸ್ಈ ಮೂಲಕ ತರಗತಿಗಳಲ್ಲಿ ಬೋರ್ಡ ಪರೀಕ್ಷೆ ನಡೆಸುವುದನ್ನು ಕಡ್ಡಾಯಗೊಳಿಸಲಾಗಿದೆ. ಶಿಕ್ಷಕನ ಅನುಭವದಿಂದ ಹುಟ್ಟಿದ ತಿಳಿವಿನಿಂದ ಈಗ ಹೇಳಲಾಗುತ್ತಿರುವ ಪರೀಕ್ಷಾ ಸುಧಾರಣೆಯ ಈ ಪ್ರತಿಗಾಮೀ ನಡೆಯನ್ನು ಕುರಿತ ವಿಮರ್ಶಾತ್ಮಕ ನೋಟವನ್ನು ಈ ಸಂಪ್ರಬಂಧವು ಪ್ರಸ್ತುತ ಪಡಿಸುತ್ತದೆ. ಅಲ್ಲದೆ ಶಿಕ್ಷಣದ ಪ್ರಗತಿಪರವಾದ ಮೊದಲ ಹೆಜ್ಜೆಗಳನ್ನು ಈ ನಿರ್ಣಯವು ಹೇಗೆ ನಿರುತ್ಸಾಹಿತಗೊಳಿಸುತ್ತಿದೆ ಎಂಬುದನ್ನು ತೋರಿಸಿಕೊಡುತ್ತದೆ. ಮುಂದಿನ ದಿನಗಳಲ್ಲಿ ಇದು ಸಂಸ್ಥೆಗಳಿಗೆ ಸಂಬಂಧಿಸಿದ ಪರಿವರ್ತನೆಗಳ ಮೇಲೂ ಪ್ರಭಾವ ಬೀರಲಿದೆ.**

ಈ ಲೇಖನವು ಸಿಬಿಎಸ್ಇ ಹತ್ತನೇ ತರಗತಿಗೆ ಇಷ್ಟರಲ್ಲೇ ಮತ್ತೊಮ್ಮೆ ಪರೀಕ್ಷೆ ನಡೆಸುವುದನ್ನು ಕಡ್ಡಾಯಗೊಳಿಸುವ ವಿಚಾರಕ್ಕೆ ಸಂಬಂಧಿಸಿದ್ದಾಗಿದೆ. ಲೇಖನದಲ್ಲಿ ಒಬ್ಬ ಶಿಕ್ಷಕನ ದೃಷ್ಟಿಯಿಂದ ವಿಷಯಗಳನ್ನು ನೋಡಲು ಯತ್ನಿಸಲಾಗಿದೆ. ಈ ಹೆಜ್ಜೆ ಹೇಗೆ ಪ್ರಗತಿಪರ ಶಿಕ್ಷಕರನ್ನು ನಿರುತ್ಸಾಹಿತರನ್ನಾಗಿಸುತ್ತದೆ ಮತ್ತು ಇಷ್ಟರಲ್ಲೇ ಶಿಕ್ಷಣದಲ್ಲಿ ಆಗಲಿರುವ ಸುಧಾರಣೆಗಳಿಗೆ ಹೇಗೆ ಇದೊಂದು ಪ್ರತಿಗಾಮಿ ಹೆಜ್ಜೆಯೆಂಬುದಾಗಿ ಸಾಬೀತಾಗುತ್ತದೆ ಎಂಬುದರ ಬಗ್ಗೆ ಇದು ವಿಶ್ಲೇಷಿಸುತ್ತದೆ.

ಈಚೆಗೆ ಸಿಬಿಎಸ್ಇ ಕಡೆಯಿಂದ ಪ್ರಕಟವಾದ ಒಂದು ಜಾಹೀರಾತಿನ ಪ್ರಕಾರ ಮುಂದಿನ ಶೈಕ್ಷಣಿಕವರ್ಷದಿಂದ ಹತ್ತನೇ ತರಗತಿಯಲ್ಲಿ ಬೋರ್ಡ್ ಪರೀಕ್ಷೆಯನ್ನು ಕಡ್ಡಾಯಗೊಳಿಸಲಾಗುತ್ತಿದೆ.

ಶಿಕ್ಷಕರು ಮತ್ತು ಪೋಷಕರು ಈ ಬಗ್ಗೆ ಕೋರಿದ್ದರೆಂದು ಮತ್ತು ಈ ಪರೀಕ್ಷೆಯನ್ನು ತೆಗೆದು ಹಾಕಿದ್ದರಿಂದ ವಿದ್ಯಾರ್ಥಿಗಳು ಶಿಕ್ಷಣವನ್ನು ಗಂಭೀರವಾಗಿ ತೆಗೆದುಕೊಳ್ಳುವುದು ಕಡಿಮೆಯಾಗಿಬಿಟ್ಟಿತ್ತು ಎಂದು ಹೇಳಲಾಗಿದೆ. ಕೆಲವು ಶಿಕ್ಷಕರ ಮಾತಿನಲ್ಲಿ ಹೇಳಬೇಕೆಂದರೆ **"**ಮಕ್ಕಳು ಹೆದರುವುದನ್ನು ನಿಲ್ಲಿಸಿಬಿಟ್ಟಿದ್ದರು**"**. ಅಲ್ಲಾ ಸ್ವಾಮಿ! ಮಕ್ಕಳು ಯಾವುದರ ಕುರಿತು ಹೆದರುವುದನ್ನು ನಿಲ್ಲಿಸಿದ್ದರು? ಪರೀಕ್ಷೆಯ ಬಗ್ಗೆ ಹೆದರುವುದನ್ನೆ? ಹೌದು. ಮಕ್ಕಳು ತಮಗೂ ಹೆದರುತ್ತಿಲ್ಲ ಎಂದು ಶಿಕ್ಷಕರ ಒಂದು ಗುಂಪು ತಿಳಿದುಕೊಂಡುಬಿಟ್ಟಿತ್ತು. ಬೆತ್ತವನ್ನಂತೂ ಮೊದಲೇ ಕಿತ್ತುಕೊಂಡುಬಿಡಲಾಗಿತ್ತು. ಎಲ್ಲ ಶಿಕ್ಷಕರೂ ಬೋರ್ಡ್ ಪರೀಕ್ಷೆಯನ್ನು ಸ್ವಾಗತಿಸುತ್ತಿದ್ದಾರೆಯೆ ಎಂದರೆ ಹಾಗೇನೂ ಇಲ್ಲ. ಇದನ್ನು ವಿರೋಧಿಸುತ್ತಿರುವ ಶಿಕ್ಷಕರ ಪರವಾಗಿ ನಾನು ನನ್ನ ಅಭಿಪ್ರಾಯಗಳನ್ನು ಇಲ್ಲಿ ಬರೆಯುತ್ತಿದ್ದೇನೆ.

ಬೋರ್ಡ್ ಪರೀಕ್ಷೆಯನ್ನು ತೆಗೆದು ಹಾಕುವದು ಇಲ್ಲವೆ ಮತ್ತೆ ಅದನ್ನು ಮೊದಲಿನಂತೆ ತರುವುದು ಒಂದು ಮಾಮೂಲಿ ಥರದ ಘಟನೆಯಂತೆ ಅನಿಸಬಹುದು. ಆದರೆ ಇದನ್ನು ಎಲ್ಲ ಸವಾಲುಗಳ ಜೊತೆಯಲ್ಲಿ ಇಟ್ಟು ನೋಡುವ ಅಗತ್ಯವಿದೆ.

**ಬೋರ್ಡ್ ಪರೀಕ್ಷೆಗೆ ಸಂಬಂಧಿಸಿದ ಸಾಮಾಜಿಕ ಸಂಕಷ್ಟಗಳು**

ಬೋರ್ಡ್ ಪರೀಕ್ಷೆ ಬರುವುದರ ಜೊತೆಜೊತೆಗೇ ಒಂದು ಶಿಕ್ಷಕ ವರ್ಗದ ಮೊದಲ ಪ್ರತಿಕ್ರಿಯೆಯೆಂದರೆ ಇನ್ನು ಮಕ್ಕಳು ಹೆದರುತ್ತಾರೆ ಎಂಬುದಾಗಿತ್ತು. ಅಂದರೆ ಮಕ್ಕಳನ್ನು ಹೆದರಿಸುವುದು ಶಿಕ್ಷಕರ ಮತ್ತು ಶಿಕ್ಷಣ ವ್ಯವಸ್ಥೆಯ ಬಹಳ ಮಹತ್ವದ ಗುರಿಗಳಲ್ಲಿ ಒಂದೇನೋ ಎನ್ನುವಂತಿದೆ. ಶಿಕ್ಷಣವನ್ನು ಮೊದಲಿನಿಂದಲೂ ಹೆದರಿಸುವಂಥದನ್ನಾಗಿಯೇ ಉಳಿಸಿಕೊಂಡುಬಂದಿರುವ ಪರಂಪರೆಯೇ ಇದೆ ಎಂದು ನನಗನಿಸುತ್ತದೆ. ನಿದರ್ಶನಕ್ಕೆ ಇದನ್ನು ಕೆಲವೇ ವರ್ಗಗಳಿಗೆ ಸೀಮಿತಗೊಳಿಸುವುದು, ಜನಸಾಮಾನ್ಯರ ನಡುವೆ ಬಳಕೆಯಲ್ಲಿಯೇ ಇಲ್ಲದಿರುವಂಥ ಪದಗಳ ಬಳಕೆ ಮಾಡುವುದು ಇತ್ಯಾದಿ. ಶಿಕ್ಷಣವನ್ನು ಕೆಲವೊಂದು ವಿಶೇಷ ವರ್ಗಗಳವರನ್ನು ಹೆದರಿಸುವುದಕ್ಕೋಸ್ಕರ ಬಳಸಲಾಗುತ್ತಿರುವ ಒಂದು ಐತಿಹಾಸಿಕ ಪರಂಪರೆ ಇದೆ. ಈ ಬಡ ಗುಡಿಸಲುಗಳ ಮಕ್ಕಳು ಓದಲಾರರು ಎಂದು ಇಂದಿಗೂ ಬಹಳ ಸುಲಭವಾಗಿ ಮಾತುಗಳನ್ನು ಉರುಳಿಸಿಬಿಡಲಾಗುತ್ತದೆ. ಈ ಐತಿಹಾಸಿಕ ಪರಂಪರೆಯನ್ನು ಗಮನದಲ್ಲಿಟ್ಟುಕೊಂಡು ನೋಡಿದರೆ

'ಈಗ ಮಕ್ಕಳು ಹದರುತ್ತಾರೆ ' ಎಂಬ ಶಿಕ್ಷಕರ ಈ ಪ್ರತಿಕ್ರಿಯೆ ನಿಮಗೆ ಅಸಹಜವೆಂದು ಅನ್ನಿಸುವುದಿಲ್ಲ. ಈ ಹೆದರುವ ಸಂಸ್ಕೃತಿಯಲ್ಲಿ ಶಿಕ್ಷಣ ಪಡೆಯುವ ಮಕ್ಕಳು ಒಬ್ಬ ನಾಗರಿಕನಾಗಿ ಏನು ಮಾಡುತ್ತಾರೆ? ಶಾಲೆಯಲ್ಲಿ ಶಿಕ್ಷರಿಗೆ ಹೆದರುತ್ತಾರೆ, ಅನಂತರ ಪೋಲೀಸರಿಗೆ ಹೆದರುತ್ತಾರೆ, ಪ್ರಭಾವಿಗಳಿಗೆ ಹೆದರುತ್ತಾರೆ, ತಮ್ಮ ಬಾಸ್ ಗೆ ಹೆದರುತ್ತಾರೆ, ನೇತಾರರಿಗೆ ಹೆದರುತ್ತಾರೆ; ಬರೀ ಹೆದರುವುದಲ್ಲ; ಅವಕಾಶ ಸಿಕ್ಕಿದರೆ ಹೆದರಿಸುತ್ತಾರೆ ಕೂಡ. ತಾವೂ ಯಾವತ್ತಾದರೂ ಹೆದರಿಸುವಂಥವರು ಆಗಬಾರದೆ ಎಂಬುದೇ ಹೆದರುವ ಜನರ ಗಾಢವಾದ (ದುರ್)ಆಸೆಯಾಗಿರುತ್ತದೆ. ನನ್ನ ಶಾಲೆಯಲ್ಲಿ ಎಂಟನೇ ತರಗತಿಯ ವಿದ್ಯಾರ್ಥಿಯೊಬ್ಬ ಯಾರದ್ದೋ ಮನೆ ಮುಂದಿನ ತೋಟದಿಂದ ಒಂದು ದಾಳಿಂಬೆಯನ್ನು ಕಿತ್ತ. ಪೋಲೀಸರಿಗೆ ದೂರು ಕೊಡಲಾಯಿತು. ಕಳ್ಳತನದ ಆರೋಪವನ್ನು ಹೊರಿಸಲಾಯಿತು. ಬಹುಶಃ ಪೋಲೀಸರ ಕಡೆಯಿಂದ ಸ್ವಲ್ಪ ಮಟ್ಟಿನ ಹೊಡೆತ ಬಡಿತ ಕೂಡ ಆಗಿರಬೇಕು. ಈಗ ನಾನು ಅವನನ್ನು ನೀವು ಏನಾಗಬೇಕು ಅಂತ ಅಂದುಕೊಂಡಿದ್ದೀರಿ ಅಂತ ಕೇಳಿದರೆ ನಾನು ಪೋಲೀಸ್ ಆಗುತ್ತೀನಿ ಅಂತಾನೆ. ಶೋಷಿತರಲ್ಲಿ ಶೋಷಕರಾಗಬೇಕೆಂಬ ಹಂಬಲ ಬಹಳ ಹೆಚ್ಚಾಗಿರುತ್ತದೆ ಎಂದು ನನ್ನ ಸೀಮಿತ ಅನುಭವದಿಂದ ಹೇಳಬಲ್ಲೆ. ಹೀಗೆ ನಾವು ಒಂದು ಹೆದರುವ ಸಂಸ್ಕೃತಿಯನ್ನು ಹುಟ್ಟು ಹಾಕುತ್ತೇವೆ. ಹೆದರಿಕೆ ರಚನಾತ್ಮಕತೆಯನ್ನು ಬಹಳ ಪ್ರಭಾವಿತಗೊಳಿಸುತ್ತದೆ. ಹೆದರಿಕೆ ಎಂಬುದು ಇಲ್ಲದಿರುವ ಜಗತ್ತಿನ ಕಲ್ಪನೆ ಮಾಡಿಕೊಂಡಿರುವ ರವೀಂದ್ರನಾಥಠಾಕೂರರ ಆ ಶಬ್ದಗಳನ್ನು ನೆನಪಿಸಿಕೊಳ್ಳಿ( where the mind is without fear , the head Is held above…) ನಾವೆಲ್ಲರೂ ಈ ಕಲ್ಪನೆಯನ್ನು ಸಾಕಷ್ಟು ಪ್ರಶಂಸಿಸಿಯೂ ಇದ್ದೇವೆ. ಆದರೆ ನಮಗೆ ಬೋರ್ಡ್ ಎಕ್ಸಾಮ್ ಕೂಡ ಬೇಕು.

**ಬೋರ್ಡ್ ಪರೀಕ್ಷೆಯು ನವೀನತಮವಾದ ಪ್ರಯೋಗಗಳನ್ನು**

**ನಿರುತ್ಸಾಹಿತಗೊಳಿಸುತ್ತದೆ**

ಕೆಲವು ಶಿಕ್ಷಕರು ತಮ್ಮ ತರಗತಿಗಳಲ್ಲಿ ಮಾಡುತ್ತಿರುವ ಆ ಪ್ರಯೋಗಗಳ ಗತಿ ಏನಾಗುತ್ತದೆ? ಅವುಗಳಲ್ಲಿ ಒಂದು ಪ್ರಯೋಗದ ಬಗೆಗೆ ಇಲ್ಲಿ ವಿಸ್ತಾರವಾಗಿ ಬರೆಯುತ್ತೇನೆ. ಅನಂತರ ಈ ರೀತಿಯ ಕೆಲಸಗಳಿಗೆ ಈ ವ್ಯವಸ್ಥೆಯಲ್ಲಿ ಎಡೆ ಎಲ್ಲಿದೆ ಎಂಬ ಪ್ರಶ್ನೆಯನ್ನು ಓದುಗರ ಮುಂದಿಡುತ್ತೇನೆ.

ಶಾಲೆಯಲ್ಲಿ ಕಲಿಯುವ ಮತ್ತು ಕಲಿಸುವ ಪ್ರಕ್ರಿಯೆ ಏನಿದೆ ಅದು ವಾಸ್ತವ ಬದುಕಿನಲ್ಲಿ ನಡೆಯುತ್ತಿರುವ ಘಟನೆಗಳ ಸಂದರ್ಭದಲ್ಲಿ ಆಗಬೇಕೆಂದು ನನಗನಿಸುತ್ತದೆ. ಮಕ್ಕಳ ಬದುಕಿಗೆ ಅವರ ವಿಚಾರಗಳಿಗೆ ತರಗತಿಯಲ್ಲಿ ನಾವು ಎಡೆ ಕೊಡಬೇಕು ಮತ್ತು ಪಠ್ಯಪುಸ್ತಕದಲ್ಲಿ ಬರೆದಿರುವ ಮಾಹಿತಿಯನ್ನು (ತಿಳಿವನ್ನು) ಅವರ ಜೀವನದ ಅನುಭವಗಳೊಂದಿಗೆ ಜೋಡಿಸಬೇಕು. ಈ ಬಗೆಯ ಕೆಲಸಗಳಿಗೆ ನಿಮಗೆ ಒಂದು ಬಗೆಯ ಸ್ವಾತಂತ್ರ್ಯವಿರಬೇಕು ಮತ್ತು ಬೋರ್ಡ್ ಪರೀಕ್ಷೆಗೆ ನೀವು ಪಾಠ ಮಾಡುವಾಗ ಈ ಸ್ವಾತಂತ್ರ್ಯವನ್ನು ಎಲ್ಲಿಂದ ತರುತ್ತೀರಿ?

ಯಾವ ಬಗೆಯ ಕೆಲಸದ ಬಗ್ಗೆ ನಾನು ಮಾತನಾಡುತ್ತಿದ್ದೇನೆಂಬುದನ್ನು ಮಕ್ಕಳ ಭಾಷೆಯಲ್ಲಿಯೇ ನೋಡೋಣ ಬನ್ನಿ...

" ಈ ಹೊತ್ತು ಬರೆಯಬೇಕೆಂದರೆ ನನಗೆ ಯಾವ ಟಾಪಿಕ್ಕೂ ಗೊತ್ತಾಗ್ತಾ ಇಲ್ಲ. ನಾನು ಬಹಳಷ್ಟು ಯೋಚನೆ ಮಾಡಿದೆ. ಆದರೂ ನನಗೆ ಏನೂ ಗೊತ್ತಾಗ್ತಾ ಇಲ್ಲ. ಬುದ್ಧಿಗೆ ಒಂದು ಟಾಪಿಕ್ ತೋಚಿತು. ಅದು ಈಗ ಭಾರತದಲ್ಲಿ ನಡೆಯುತ್ತಾ ಇರೋ ನ ನೋಟಿನ ಅಮಾನ್ಯೀಕರಣ. ಆದರೆ ಸ್ವಲ್ಪ ಹತ್ತು ಯೋಚನೆ ಮಾಡಿದ ಮೇಲೆ ಈ ಟಾಪಿಕ್ ಚೆನ್ನಾಗಿಲ್ಲ ಅಂತ ಅನ್ನಿಸಿತು. ಆದ್ದರಿಂದ ಈ ಟಾಪಿಕ್ ಮೇಲೆ ನಾನು ಬರೆಯಲಿಲ್ಲ. ನಮ್ಮ ಸರ್ ಹೇಳ್ತಾರೆ–ನೀನು ಯಾವ ಟಾಪಿಕ್ ಮೇಲೆ ಬೇಕಾದರೂ ಬರಿ, ಆದರೆ ಅದು ನಿನ್ನ ಅನುಭವ ಆಗಿರಬೇಕು ಅಂತ, ಆ ಕಥೆ ನಿನಗೆ ಸಂಬಂಧ ಪಟ್ಟಿದ್ದಾಗಿರಬೇಕು ಅಂತ. ಆದರೂ ನನಗೆ ಏನೊಂದೂ ಗೊತ್ತಾಗ್ತಾ ಇರಲಿಲ್ಲ. ಕಾರಣ ಒಂದು ಪೇಜು ಬರೆಯ ಬೇಕಲ್ಲ ಅನ್ನುವ ಚಿಂತೆ ಅಲ್ಲ. ನನ್ನ ಬುದ್ಧಿ ಬೇರೆ ಇನ್ನೆಲ್ಲೋ ಇತ್ತು. ಯಾಕೋ ಏನೋ ಈ ಹೊತ್ತು ನನಗೆ ಯಾವ ಟಾಪಿಕ್ಕೂ ಸಿಗ್ತಾ ಇಲ್ಲ. ಹಾಗಾಗಿ ನಾನು ಬರೆಯದೆ ಇರುವ ಕಾರಣವನ್ನೇ ನನ್ನ ಟಾಪಿಕ್ ಮಾಡಿಕೊಂಡುಬಿಟ್ಟೆ."

ಇ ಇನ್ನೊಬ್ಬಳು ಹುಡುಗಿ ಇದೇ ಥರದ ಒಂದು ಬರಹವನ್ನು ಮುಂದಿಟ್ಟಿದಳ್ಳು–(ಪ್ರಸ್ತುತ ಪಡಿಸಿದ್ದ)

" ನಮ್ಮ ಸರ್ ನಮಗೆ ದಿನಾ ಒಂದು ಪೇಜ್ ಬರೆಯಕ್ಕೆ ಹೇಳ್ತಾರೆ. ಯಾವುದಾದರೂ ಸರಿ, ಎಲ್ಲಿಂದಾದರು ಸರಿ ಯಾವುದರ ಬಗ್ಗೆನಾದರೂ ಬರಿ ಮತ್ತು ನೀನು ಏನು ಬರೀತೀಯಾ ಅದು ನಿನ್ನ ಅನುಭವವಾಗಿರಲಿ,...... ನಿನಗೇನು ಅನುಭವಕ್ಕೆ ಬರುತ್ತೋ ಅದೇ ಆಗಿರಲಿ ಅಂತಾರೆ. ಅವರೇನೋ ಬಹಳ ಸುಲಭನಾಗಿ ಹೇಳಿ ಬಿಡುತ್ತಾರೆ. ಆದರೆ ನಾನು ಬರೆಯಲು ಕೂತರೆ( ಯಾವುದರ ಬಗ್ಗೆ ಬರೀಲಿ, ಏನು ಬರೀಲಿ ಹೇಗೆ ಬರೀಲಿ..... ಹೇಗೆ ಪ್ರಾರಂಭ ಮಾಡಲಿ ಮತ್ತು ಹ್ಯಾಗೆ ಮುಕ್ತಾಯ ಮಾಡಲಿ ಅಂತ ಬಹಳ 'ಕನ್‌ಫ್ಯೂಜ್ಡ್' ಆಗಿಬಿಡ್ತೀನಿ. ಸ್ವಲ್ಪ ಹೊತ್ತಿನ ನಂತರ ಒಂದು ಟಾಪಿಕ್ ತೆಗೆದುಕೊಂಡು ಅದರ ಬಗ್ಗೆ ಯೋಚಿಸತೊಡಗುತ್ತೀನಿ...... ಅದರ ಪ್ರಾರಂಭ ಮಾಡ್ತೀನಿ, ಆಮೇಲೆ ನಿಧಾನವಾಗಿ ಅದರ ಬಗ್ಗೆ ಬರೀತಾ ಬರೀತಾ ಪೇಜು ಭರ್ತಿ ಆಗಿಬಿಡುತ್ತೆ, ಎಲ್ಲಿಗೆ ಮುಕ್ತಾಯ ಮಾಡಲಿ(ನಿಲ್ಲಿಸಲಿ) ಅಂತ ಗೊತ್ತಾಗಲ್ಲ.. ಒಂದೊಂದು ಸಲವಂತೂ ಬರೀತಾ ಬರೀತಾ ಶಬ್ದಗಳೇ ಮುಗಿಯುವುದಿಲ್ಲ. ನನ್ನ ಶಬ್ದಗಳಲ್ಲಿ ಬರೆಯುವುದು ಬಹಳ ಸುಲಭನಾಗಿ ಬಿಡುತ್ತೆ, ಆದರೆ ಟಾಪಿಕ್ ಏನಿದ್ದರೂ ನಮಗೆ ಗೊತ್ತಿರೋಂಥದಾಗಿರಬೇಕು ಮತ್ತು ಅದು ನಮ್ಮ ಅನುಭವಕ್ಕೆ ಬಂದಿರೋಂಥೋದು ಆಗಿರಬೇಕು. ಆಗಲೇ ನಾವು ಸುಲಭವಾಗಿ ಬರೆಯಬಹುದು."

ನಾನು ಇದಕ್ಕೆ ಇನ್ನು ಸ್ವಲ್ಪ ಸೇರಿಸ ಬಯಸುತ್ತೇನೆ. ಅದು ಮಕ್ಕಳು ಈ ಇಡೀ ಕಾರ್ಯವನ್ನು ಹೇಗೆ ನೋಡುವರು ಮತ್ತು ತಿಳಿದುಕೊಳ್ಳುವರು ಎಂಬುದು. ಒಬ್ಬ ಶಿಕ್ಷಕನಾಗಿ ನನ್ನನ್ನು ತುಂಬ ಚಿಂತೆಗೀಡುಮಾಡುವಂಥದು ಶಾಲೆಯ ಒಳಗಿನ (ಅಸಹಜ) ಪ್ರಪಂಚ. ನಮ್ಮ ದಿನನಿತ್ಯದ ಜೀವನದಿಂದ ತುಂಬ ಬೇರೆಯಾಗಿರುವಂಥದನ್ನು ಮಾಡುತ್ತಾ ಇದ್ದೀವೇನೋ ಎನ್ನುವಂತೆ ತೋರಿಸ ಬಯಸುತ್ತೇವೆ. ಯಾವುದಾದರೊಂದು ವಿಷಯವನ್ನು ಅದು ಪಠ್ಯಕ್ರಮದ ಭಾಗವಾಗಿದೆ ಎನ್ನುವ ಕಾರಣದಿಂದಾಗಿ ಪಾಠಮಾಡುತ್ತಿರುತ್ತೇವೆ ಮತ್ತು ಪರೀಕ್ಷೆಯಲ್ಲಿ ಆ ಪಠ್ಯಕ್ರಮಕ್ಕೆ ಸಂಬಂಧಿಸಿದಂತೆ ಪ್ರಶ್ನೆಗಳನ್ನು ಕೇಳಲಾಗುತ್ತದೆ. ಪರಿಸ್ಥಿತಿ ಯಾವ ರೀತಿಯ ಕೃತಕ ರೂಪಕ್ಕೆ ಬಂದಿದೆ ಅಂದರೆ ನಮ್ಮ ಜೀವನದಲ್ಲಿ ನೀರಿನ ಪ್ರಯೋಜನ ಏನು ಎಂದು ಮಕ್ಕಳನ್ನು ಪ್ರಶ್ನಿಸಿದರೆ ಅವರ ಉತ್ತರ "ಸರ್ ನಾಳೆ ಜ್ಞಾಪಿಸಿಕೊಂಡು ಹೇಳ್ತೀನಿ" ಎಂದಾಗಿರುತ್ತದೆ. ಯಾವುದಾದರೂ ರೀತಿಯಲ್ಲಿ ನನ್ನ ತರಗತಿಯಲ್ಲಿ ನಡೆಯುವ ಪಾಠದ ಪ್ರಕ್ರಿಯೆಯು ಕೃತಕವಾಗುವುದನ್ನು ನಾನು ತಪ್ಪಿಸಬೇಕು ಮತ್ತು ಪಠ್ಯಕ್ರಮದಲ್ಲಿ ಸೂಚಿಸಿರುವ ವಿಷಯಗಳನ್ನು ಮಕ್ಕಳ ದಿನನಿತ್ಯದ ಬದುಕಿನೊಂದಿಗೆ ಜೋಡಿಸಬೇಕು ಎಂಬುದೇ ನನ್ನ ಹಠ. ದಿನನಿತ್ಯದ ಜೀವನವನ್ನಂತೂ ನಾನು ನಿಯಂತ್ರಿಸಲಾಗುವುದಿಲ್ಲ. ಆದರೆ ಪಠ್ಯಕ್ರಮವನ್ನು ಒಂದು ಹಂತದ ವರೆಗೆ ಪ ಸಮನ್ವಯಗೊಳಿಸುವ ಪ್ರಯತ್ನ ಮಾಡುವೆ.

**ಇದೆಲ್ಲ ಆಗುವುದಾದರೂ ಹೇಗೆ?(**

ನನ್ನ ಜೊತೆ ತರಗತಿಯಲ್ಲಿ ಕಲಿಯುವ ಮಕ್ಕಳು ಪ್ರತಿ ದಿನವೂ ಒಂದು ಪುಟ ಬರೆದು ಕೊಂಡು ಬರುವುದು ಇರುತ್ತದೆ.

ಟಾಪಿಕ್ ಅನ್ನು ನಾನು ನಿರ್ಣಯಿಸುವುದಿಲ್ಲ. ಯಾವ ವಿಷಯದ ಬಗ್ಗೆ ಬರೆಯಲಿ ಎಂಬುದನ್ನು ನಿರ್ಣಯಿಸುವುದಕ್ಕೂ ಮಕ್ಕಳು ವಿಚಾರಗಳ ಒಂದು ಪ್ರಕ್ರಿಯೆಯ ಮೂಲಕ ಹಾದುಹೋಗುವುದು ಇರುತ್ತದೆ. ಮತ್ತು ಈ ಪ್ರಕ್ರಿಯೆಯು ಬಹುಶಃ ಅವರ ಟಾಪಿಕ್‌ಗಿಂತ ಹೆಚ್ಚು ಮಹತ್ವದ್ದಾಗಿರುತ್ತದೆ. ಇದಲ್ಲದೆ ಇನ್ನೊಂದು ಲಾಭವೂ ಇರುತ್ತದೆ. ಅದೆಂದರೆ ತರಗತಿಯಲ್ಲಿ 40 ಮಕ್ಕಳಿದ್ದರೆ ನಲವತ್ತು ಬೇರೆ ಬೇರೆ ವಿಷಯಗಳನ್ನು ಕುರಿತಂತೆ ಬರಹಗಳು ನಿಮ್ಮ ಬಳಿಗೆ ಬರುತ್ತವೆ. ಯಾರ ಬರಹ ಚೆನ್ನಾಗಿದೆ ಯಾರ ಬರಹ ಕೆಟ್ಟದಾಗಿದೆ ಎಂಬ ಬಗ್ಗೆ ಹೋಲಿಕೆ ಕೂಡ ಆಗುವುದಿಲ್ಲ. ಎಲ್ಲ ಮಕ್ಕಳೂ ಈ ಬರಹವನ್ನು ಬರೆದಿದ್ದಾರೆಯೆ ಇಲ್ಲವೆ ಎಂಬುದನ್ನು ನಾನು ಸ್ಥೂಲವಾಗಿ ನೋಡುತ್ತೇನೆ. ್ಮ ಮಕ್ಕಳಿಗೆ ತಾನು ಇಷ್ಟ ಪಟ್ಟಲ್ಲಿ ತನ್ನ ಲೇಖನವನ್ನು ಓದುವ ಅಥವಾ ಇಷ್ಟವಿಲ್ಲದಿದ್ದರೆ ತನ್ನ ಲೇಖನವನ್ನು ಓದಲು ಅನುಮತಿಸದ ಆಯ್ಕೆ ಇರುತ್ತದೆ. ಕೆಲವು ಬರಹಗಳ ಬಗ್ಗೆ ಚರ್ಚೆ ಪ್ರಾರಂಭವಾಗುತ್ತದೆ ಮತ್ತು ಅದು ಅವರ ಪಠ್ಯಕ್ರಮದ ಯಾವುದಾದರೊಂದು ಭಾಗದೊಂದಿಗೆ ಸೇರಿಕೊಂಡುಬಿಡುತ್ತದೆ. ಹಲವು ಸಲ ಮಕ್ಕಳಿಗೆ ಈ ವಿಷಯ ಗೊತ್ತಿರುವುದಿಲ್ಲ. ಮಾತು ಮಾತಿನಲ್ಲೇ ನಾವು ಪಠ್ಯಕ್ರಮದಲ್ಲಿ ಸೂಚಿಸಿರುವ ಯಾವುದೋ ಒಂದು ಪಾಠವನ್ನು ಓದಿಬಿಡುತ್ತೇವೆ. ಆಮೇಲೆ ನಾನು ಇಂಥ ಪಾಠವನ್ನು ನಾವು ಓದಿದ್ದೇವೆ ಎಂಬುದನ್ನು ತಿಳಿಸುತ್ತೇನೆ.

ಉದಾಹರಣೆಗೆ 10 ನೇ ತರಗತಿಯ " ಪ್ರಜಾಪ್ರಭುತ್ವದ ರಾಜಕೀಯ" ಎಂಬ ಪಠ್ಯ ಪುಸಕ್ತದಲ್ಲಿ "ಲಿಂಗ, ಜಾತಿ ಮತ್ತು ಧರ್ಮ" ಎಂಬ ಪಾಠವಿದೆ. ಈ ಪಾಠವನ್ನು ನಾವು ಮಕ್ಕಳ ಇಂಥದೇ ಒಂದು ಬರಹದ ಮೂಲಕ ಓದಿದ್ದೆವು. ಈಗ ಏಳುವ ಪ್ರಶ್ನೆ ಏನೆಂದರೆ: ತಮ್ಮ ತರಗತಿಯನ್ನು ಪರೀಕ್ಷಾ ತಂತ್ರದ ಬಲೆಯಿಂದ ಹೊರ ತರಬೇಕೆಂದು ಪ್ರಯಾಸ

ಪಡುತ್ತಿರುವ ನಾನು ಮತ್ತು ನನ್ನಂಥ ಸಾವಿರಾರು ಶಿಕ್ಷಕರ ಗತಿ ಏನಾಗುತ್ತದೆ? ತಮ್ಮ ಜೀವನಕ್ಕೆ ಸಂಬಂಧಿಸಿದಂಥ ಸಂಗತಿಗಳನ್ನೂ ಕಲಿಯಬೇಕೆಂದಿಚ್ಚಿಸುವ ಆದರೆ ಪರೀಕ್ಷಾ ತಂತ್ರದಲ್ಲಿ ಅದಕ್ಕೆಲ್ಲಾ ಎಡೆಯೇ ಇಲ್ಲದಿರುವ ಮಕ್ಕಳ ಗತಿಯೇನು? ನೀವು ಒಂದು ವೇಳೆ ಶಾಲೆಗೆ ಬಂದು 12ನೇ ತರಗತಿಯ ಪ ಪಕ್ಕದಲ್ಲಿ ಹಾದು ಹೋದರೆ ಈ ಬೋರ್ಡ್ ಪರೀಕ್ಷೆಯ ತಾಕತ್ತೇನು ಎಂಬುದರ ಕುರಿತು ಅಂದಾಜಿಸಬಹುದು. ನಲವತ್ತರ ಸ ಆಸು–ಪಾಸಿನವರು ಮೌನಧಾರಣೆ ಮಾಡಿಬಿಟ್ಟಿದ್ದಾರೇನೋ ಎನ್ನುವಂತೆ ನಿಶ್ಶಬ್ದದಿಂದಿರುತ್ತಾರೆ. ಶಾಲೆಯಲ್ಲಿ ನಡೆಯುತ್ತಿರುವ ಇನ್ನಿತರ ಸಂಗತಿಗಳಿಗೂ ತಮಗೂ ಯಾವ ಸಂಬಂಧವೂ ಇಲ್ಲವೇನೋ ಎನ್ನುವಂತೆ ಮೌನವಾಗಿರುತ್ತಾರೆ. ಎಷ್ಟರ ಮಟ್ಟಿಗೆ ಎಂದರೆ ಬೆಳಗಿನ ಪ್ರಾರ್ಥನೆಯ ಸಮಯದಲ್ಲೂ ಅವರಿಗೆ ಪಾಠ ಮಾಡುವ ಕಾರ್ಯ ನಡೆಯುತ್ತಿರುತ್ತದೆ. ಪ್ರತಿದಿನ ಒಂದು ಗಂಟೆಯ ಹೊರತಾಗಿ ಪಾಠ ನಡೆಯುತ್ತದೆ. ಚಳಿಗಾಲದ ಮತ್ತು ಬೇಸಿಗೆಯ ರಜೆಯಲ್ಲೂ ಅವರನ್ನು ಶಾಲೆಗೆ ಕರೆಸಿಕೊಳ್ಳಲಾಗುತ್ತದೆ. ಮತ್ತು ಇದೆಲ್ಲವೂ ಹತ್ತನೇ ತರಗತಿಯ ವಿದ್ಯಾರ್ಥಿಗಳಿಗೆ ಇನ್ನೊಮ್ಮೆ ಆಗುತ್ತದೆ. ಇಷ್ಟೆಲ್ಲ ಧಾಮ್ ಧೂಮ್ ಯಾತಕ್ಕೆ ಅಂದರೆ, ಸ್ವಾಮಿ ಬೋರ್ಡ್ ಪರೀಕ್ಷೆ ನಡೆಯಲಿದೆ!

**ಬೋರ್ಡ್ ಪರೀಕ್ಷೆಯನ್ನು ಶಿಕ್ಷಣದ ಗುಣವತ್ತತೆಯನ್ನು ಹೆಚ್ಚಿಸುವಂಥದನ್ನಾಗಿ ನೋಡುವ ತಪ್ಪು**

ಬೋರ್ಡ್ ಪರೀಕ್ಷೆಯಿಂದ ಶಿಕ್ಷಣದ ಗುಣಮಟ್ಟದಲ್ಲಿ ಸುಧಾರಣೆ ಉಂಟಾಗುತ್ತದೆ ಎಂದು ವಾದಿಸಲಾಗುತ್ತದೆ. ಆದರೆ ಈ ಗುಣಮಟ್ಟದಿಂದ ಆಗಬೇಕಾದದ್ದೇನಿದೆ. ಉಚ್ಚ ಶಿಕ್ಷಣಕ್ಕೆ ಈಗಲೂ ಕೆಲವೇ ಕೆಲವು ಜನರಿಗೆ ಮಾತ್ರ ಅನುಕೂಲಗಳಿವೆ. ನೀವಾದರೋ ಉಚ್ಚ ಶಿಕ್ಷಣಕ್ಕೆ ಪ್ರತ್ಯೇಕವಾದ ಪ್ರವೇಶ ಪರೀಕ್ಷೆಯನ್ನು ನಿಗದಿಪಡಿಸಿದ್ದೀರಿ. ಕೆಲಸಕ್ಕೆ ಸೇರಲು ಬೇರೆಯದೇ ಪರೀಕ್ಷೆ ಮತ್ತು ಸಂದರ್ಶನದ ವ್ಯವಸ್ಥೆಯಂತೂ ಇದ್ದೇ ಇದೆ..... ಇನ್ನು ಕೆಲವು ಹೆಚ್ಚಿನ ಸಂಖ್ಯೆಯ ಮಕ್ಕಳಿಗೆ ಸರ್ಟಿಫಿಕೇಟ್ ಏಕೆ ಸಿಗುತ್ತೆ ಎಂಬುದು ನಿಮ್ಮ ಚಿಂತೆ. ಮಾರ್ಕೆಟ್(ಬಾಜಾರ್) ಆಧಾರಿತ ಆಧುನಿಕ ಅರ್ಥವ್ಯವಸ್ಥೆಯಲ್ಲಿ ಉದ್ಯೋಗ ದೊರಕಿಸಿಕೊಳ್ಳಲು ಸರ್ಟಿಫಿಕೇಟ್ ಅತ್ಯಂತ ಅಗತ್ಯವಾಗಿದೆ. ಅದು ಕೌಶಲಾಧಾರಿತವಲ್ಲದ ಉದ್ಯೋಗ ಆಗಿದ್ದರೆ ತಾನೆ ಏನಂತೆ, ಅದಕ್ಕೂ ಸರ್ಟಿಫಿಕೇಟ್ ತೀರಾ ಅನಿವಾರ್ಯವಾಗಿಬಿಟ್ಟಿದೆ. ಡ್ರೈವರ್ ಕೆಲಸ, ಸೆಕ್ಯುರಿಟಿ ಗಾರ್ಡ್ ಕೆಲಸ ಇತ್ಯಾದಿ ಕೆಲಸಗಳನನು ಹುಡುಕಿಕೊಂಡು ಪೇಟೆಗೆ ಹೋಗುವ ಸಹಸ್ರಾರು ಸಂಖ್ಯೆಯ ಜನರ ಹತ್ತಿರ ಸರ್ಟಫಿಕೇಟ್ ಇಲ್ಲದೆ ಇದ್ದರೆ ಅವರನ್ನು ಕೆಲಸಕ್ಕೆ ತೆಗೆದುಕೊಳ್ಳುವುದಿಲ್ಲ. ಈ ಜನರು ಗುಣಮಟ್ಟದ ಶಿಕ್ಷಣದ ಬಲಿಪಶುಗಳಾಗಿಬಿಡುತ್ತಾರೆ.

**ಅಂಕಿಗಳು ಏನನ್ನು ಹೇಳುತ್ತವೆ?**

| ವರ್ಷ | 10ನೇ ತರಗತಿ ಉತ್ತೀರ್ಣರಾದವರ % | 12ನೇ ತರಗತಿ ಉತ್ತೀರ್ಣರಾದವರ % |
|---|---|---|
| 2009 | 88. 83 | 81.00 |
| 2010 | 89. 28 | 79. 87 |
| 2011 | 96.61 | 80.88 |
| 2012 | 98. 19 | 80.19 |
| 2013 | 98. 76 | 82.10 |
| 2014 | 98. 87 | 82.66 |
| 2015 | 97. 32 | 82. |

**ಮೂಲ: ಸಿಬಿಎಸ್ ಇ ವಾರ್ಷಿಕ ವರದಿ, 2015–16**

ಈ ಅಂಕಿಸಂಖ್ಯೆಗಳು ತುಂಬ ಆಸಕ್ತಿದಾಯಕವಾದವು. 2009 ಮತ್ತು 2010 ರಲ್ಲಿ ಬೋರ್ಡ್ ಪರೀಕ್ಷೆಯಲ್ಲಿ ಹತ್ತಿರ ಹತ್ತಿರ ಶೇಕಡಾ 89 ಜನ(89%) ವಿದ್ಯಾರ್ಥಿಗಳು ಉತ್ತೀರ್ಣರಾದರು. 2012 ರಲ್ಲಿ ಇದೇ ವಿದ್ಯಾರ್ಥಿಗಳು 12ನೇ ಪರೀಕ್ಷೆಗೆ ಕೂತುಕೊಂಡಾಗ ಆ ವರ್ಷ ಉತ್ತೀರ್ಣರಾದವರ ಸಂಖ್ಯೆ ಶೇಕಡಾ80(80%) ಇತ್ತು. 2011ರಲ್ಲಿ ಮೊದಲನೇ ಬಾರಿಗೆ ಬೋರ್ಡ್ ಪರೀಕ್ಷೆಯನ್ನು ಐಚ್ಛಿಕ ಮಾಡಿದಾಗ ಆ ವರ್ಷ ಹತ್ತಿರ ಹತ್ತಿರ ಶೇಕಡಾ 97(97%) ವಿದ್ಯಾರ್ಥಿಗಳು ಉತ್ತೀರ್ಣರಾದರು. ಇದೇ ಹುಡುಗರು 2013ರಲ್ಲಿ 12ನೇ ಪರೀಕ್ಷೆಗೆ ಕುಳಿತುಕೊಂಡಾಗ ಹತ್ತಿರ ಹತ್ತಿರ ಶೇಕಡಾ 82ರಷ್ಟು ವಿದ್ಯಾರ್ಥಿಗಳು ಉತ್ತೀರ್ಣರಾದರು. 2014 ಮತ್ತು 2015ರ 12ನೇ ಬೋರ್ಡ್ ಪರೀಕ್ಷೆಯ ಫಲಿತಾಂಶದಲ್ಲೂ ಇದೇ ಪ್ರವೃತ್ತಿ ಕಂಡುಬರುತ್ತದೆ. ಅದೇ ಇನ್ನೊಂದು ಕಡೆ ಬೋರ್ಡ್ ಪರೀಕ್ಷೆಯ ಆಯ್ಕೆಯ ವ್ಯವಸ್ಥೆ ಜಾರಿಯಾದಾಗ ಹತ್ತನೇ

ಪರೀಕ್ಷೆ ತೇರ್ಗಡೆಯಾಗುವ ವಿದ್ಯಾರ್ಥಿಗಳ ಶೇಕಡಾವಾರು ಪ್ರಮಾಣದಲ್ಲಿ ವೃದ್ಧಿಯಾಯಿತು. ಇನ್ನು 2014ರಲ್ಲಿ ಈ ಸಂಖ್ಯೆ ವೃದ್ಧಿಸಿ ಶೇಕಡಾ 98. 87 ಅನ್ನು ತಲುಪಿತು. ಅಲ್ಲದೆ ಮುಂದಿನ ವರ್ಷ 2015ರಲ್ಲಿ ಮಾಮೂಲಿ ಇಳಿಕೆಯೊಂದಿಗೆ ಶೇಕಡಾ 97. 32 ಕ್ಕೆ ಬಂದಿತು.

ಸ್ಥೂಲವಾಗಿ ನೋಡುವುದಾದರೆ ಆಯ್ಕೆಯ ಅವಕಾಶವಿರುವ ಬೋರ್ಡ್ ಪರೀಕ್ಷೆಯ ಏರ್ಪಾಟಿನ ನಂತರ ಹತ್ತಿರ ಹತ್ತಿರ ಶೇಕಡಾ ಹತ್ತಕ್ಕಿಂತಲೂ ಹೆಚ್ಚು ವಿದ್ಯಾರ್ಥಿಗಳು ಹತ್ತನೇ ಪರೀಕ್ಷೆಯಲ್ಲಿ ಉತ್ತೀರ್ಣರಾಗತೊಡಗಿದರು. ಅದರ ಜೊತೆಜೊತೆಗೇ 12ನೇ ತರಗತಿಯ ಬೋರ್ಡ್ ಪರೀಕ್ಷೆಯ ಫಲಿತಾಂಶದ ಮೇಲೆ ಇದರದೇನೂ ಪರಿಣಾಮ ಆಗಲಿಲ್ಲ ಎಂಬುದನ್ನು ಈ ಅಂಕಿಸಂಖ್ಯೆಗಳು ತೋರಿಸುತ್ತವೆ. ಅಂಕಿ ಸಂಖ್ಯೆಗಳನ್ನು ಕುರಿತಾದ ವ್ಯಾಪಕ ಅಧ್ಯಯನವು 2013 ರಿಂದ 2015ರ ನಡುವೆ ಉತ್ತಮ ಗ್ರೇಡ್ ನಲ್ಲಿ ಪಾಸಾದ ಮಕ್ಕಳ ಸಂಖ್ಯೆಯೂ ವೃದ್ಧಿಸಿದೆ ಎಂಬುದನ್ನು ತೋರಿಸುತ್ತದೆ. ಗುಣಮಟ್ಟದ ಮೇಲೆ ಯಾವುದೇ ಪರಿಣಾಮ ಉಂಟಾಗಲಿಲ್ಲ ಎಂಬುದನ್ನಂತೂ ಈ ಅಂಕಿಸಂಖ್ಯೆಗಳು ತೋರಿಸಿಯೇ ತೋರಿಸುತ್ತವೆ. ಗುಣಮಟ್ಟದಲ್ಲಿ ಬಹಳ ಇಳಿಕೆಯಾಗಿದೆ ಎನ್ನುವುದು ಕೇವಲ ಒಂದು ಆರೋಪವಷ್ಟೇ ಆಗಿತ್ತು. ಮತ್ತೆ ಸಂಸತ್ತಿನಲ್ಲಿ ಈ ವಿಷಯವನ್ನು ಎತ್ತಿಕೊಳ್ಳುವಂಥದೇನಿತ್ತು ಮತ್ತು ತರಾತುರಿಯಲ್ಲಿ ಬೋರ್ಡ್ ಪರೀಕ್ಷೆಯನ್ನು ಮತ್ತೆ ಯಥಾವತ್ತಾಗಿ ತರುವಂಥ ಸಂಕಷ್ಟವೇನಿತ್ತೋ ಅರ್ಥವಾಗುವುದಿಲ್ಲ.

ಶೇಕಡಾ ಹತ್ತರಷ್ಟು ಹೆಚ್ಚು ವಿದ್ಯಾರ್ಥಿಗಳು ಹತ್ತನೇ ಪರೀಕ್ಷೆಯಲ್ಲಿ ಪಾಸಾಗಬೇಕೆಂಬುದೇ ಎಲ್ಲಕ್ಕಿಂತ ಮುಖ್ಯವಾದ ಕಾರಣವೆಂದು ನನಗನ್ನಿಸುತ್ತದೆ. ಸಮಾಜದ ಅನೇಕ ವರ್ಗಗಳಿಗೆ ಇದು ಸ್ವಲ್ಪವೂ ಸರಿ ಹೋಗಲಿಲ್ಲ ಎನ್ನಿಸಿತು. ಇವರುಗಳು ತಮ್ಮ ಒಂದು ವಿಶಿಷ್ಟ ಐಡೆಂಟಿಟಿಯನ್ನು ಕಾಪಾಡಿಕೊಳ್ಳಲು ಬಯಸುತ್ತಾರೆ. ಶಾಲೆಯವರು ಆಯೋಜಿಸುವ ಪರೀಕ್ಷೆಯಲ್ಲಿ ತುಂಬ ದೊಡ್ಡ ಸಂಖ್ಯೆಯಲ್ಲಿ ಮಕ್ಕಳು ಪಾಸಾಗತೊಡಗಿದಾಗ ಇವರ ವಿಶಿಷ್ಟತೆ ಕೊನೆಗೊಳ್ಳತೊಡಗಿತು. ಸರಿ ಶಿಕ್ಷಣದ ಗುಣಮಟ್ಟ ಇಳಿದುಹೋಯಿತು ಎಂದು ಕೆಲವರು ಬೊಬ್ಬೆ ಹೊಡೆಯತೊಡಗಿದರು. ಇವರ ಬಳಿ ದೊಡ್ಡ ಗಂಟಲಿದೆ. ಮತ್ತು ತಮ್ಮ ಗಂಟಲನ್ನು ತುಂಬ ದೂರದವರೆಗೂ ಮುಟ್ಟಿಸಬಲ್ಲ ವ್ಯವಸ್ಥೆಯೂ ಇದೆ. ತಮ್ಮ ಮನೆಯಲ್ಲಿ ಮೊದಲ ಬಾರಿಗೆ ಮೆಟ್ರಿಕ್ ಪಾಸಾದಾಗ ಆ ವರ್ಗ ಉತ್ಸಾಹದಿಂದ ತುಂಬಿತ್ತು. ಆದರೆ ಈ ಉತ್ಸಾಹ ಬಹಳ ದಿನಗಳತನಕ ಉಳಿಯಲಿಲ್ಲ. ಈಚೆಗೆ ಮಗುವಿನ ತಾಯಿಯೊಬ್ಬಳು ನನ್ನ ಹತ್ತಿರ–"ನಾನು ಬೇರೆಯವರ ಮನೇಲಿ ಕೆಲಸ ಮಾಡಲು ಹೋಗುತ್ತೇನೆ. ಕಸ ಹೊಡೆಯುತ್ತ, ನೆಲ ಸಾರಿಸುತ್ತ ಸೊಂಟ ನೋಯಕ್ಕೆ ಶುರುವಾಗುತ್ತೆ, ವಯಸ್ಸೂ ಆಗಿದೆ. ಅಡಿಗೆ ಮಾಡೋವಾಗ ಒಂದೊಂದು ಸಲ ಕೈ ಸುಟ್ಟುಕೊಳ್ಳುತ್ತೀನಿ. ಆದರೆ ನನ್ನ ಹೆಣ್ಣು ಮಕ್ಕಳಿಗೆ ಇಂಥದೆಲ್ಲ ಮಾಡುವಂಥ ಪರಿಸ್ಥಿತಿ ಬರಬಾರದು ಅನ್ನುವುದು ನನ್ನ ಆಸೆ. ಎಂಥದಾದರೂ ಒಂದು ಕಾಗದ ಇಲ್ಲಿ ಸಿಕ್ಕಿಬಿಟ್ಟರೆ ಸಾಕು" ಎಂದು ಹೇಳಿದಳು. ಕಾಗದ ಎಂದರೆ ಆಕೆಯ ಅರ್ಥ ಸರ್ಟಿಫಿಕೇಟ್ ಅಂತ. ಈ ಕಾಗದಗಳು ಅವರುಗಳ ಜೀವನದಲ್ಲಿ ಬಹಳ ಮಹತ್ವದವು ಅಂತ ನನಗೆ ಅನ್ನಿಸುತ್ತಿತ್ತು. ಮತ್ತೆ ಇದು ಯಾಕಾಗಬಾರದು– ಎಲ್ಲಾದರೂ ಕೆಲಸ ಹುಡುಕಲು ಹೋದಾಗ ಎಲ್ಲಕ್ಕಿಂತ ಮೊದಲು ಕಾಗದ(ಸರ್ಟಿಫಿಕೇಟ್) ತೋರಿಸು ಅಂತಲೇ ಹೇಳುತ್ತಾರೆ.

ಈಗ ಸ್ವಲ್ಪ ಯೋಚನೆ ಮಾಡಿ. ಹತ್ತನೇ ತರಗತಿಯಲ್ಲಿ ಶೇಕಡಾ 98 ವಿದ್ಯಾರ್ಥಿಗಳು ತೇರ್ಗಡೆಯಾದರು. 12ನೇ ತರಗತಿಯಲ್ಲಿ ಶೇಕಡಾ 82ರಷ್ಟು ವಿದ್ಯಾರ್ಥಿಗಳು ಅಂದರೆ ಹತ್ತಿರ ಹತ್ತಿರ ಶೇಕಡಾ 16ರಷ್ಟು ವಿದ್ಯಾರ್ಥಿಗಳು ಶಾಲಾ ವ್ಯವಸ್ಥೆಯ ಹೊರಗೇ ಉಳಿದುಬಿಟ್ಟರು. ಆದರೆ ಮೆಟ್ರಿಕ್ ಫೇಲ್ ಅಂತ ಕರೆಸಿಕೊಳ್ಳುವುದರಿಂದ ಅವರು ಬಚಾವಾದರು.

ಹತ್ತನೇ ತರಗತಿಯಲ್ಲಿ ಬೋರ್ಡ್ ಪರೀಕ್ಷೆ ಆಯ್ಕೆಯಾಗಿದ್ದ ಸಂದರ್ಭದಲ್ಲಿ ಶಾಲೆಯ ಮಕ್ಕಳ ವ್ಯಕ್ತಿಗತ ಗುಣಗಳನ್ನು ನೋಡಲಾಯಿತು. ಸಿಸಿಇಯಲ್ಲಿ ಮಕ್ಕಳ ವಿಶಿಷ್ಟ ಗುಣಗಳ ಆಧಾರದ ಮೇಲೆ ಅವರ ಮೌಲ್ಯಮಾಪನ ಮಾಡುವ ವ್ಯವಸ್ಥೆ ಇತ್ತು. ಸಂಗೀತ, ಆಟಪಾಟ ಮತ್ತು ಕಲೆಯ ವಿಭಿನ್ನ ಆಯಾಮಗಳಲ್ಲಿ ಉತ್ತಮ ಪ್ರದರ್ಶನ ನೀಡುತ್ತಿದ್ದ ಅನೇಕ ಮಕ್ಕಳು ಬೋರ್ಡ್ ಗಪರೀಕ್ಷೆಯಲ್ಲಿ ತೇರ್ಗಡೆಯಾಗುವುದರಲ್ಲಿ ಸಫಲರಾದರು. ಆದರೆ ಈಗ ಈ ಬಗೆಯ ಗುಣಗಳಿಗೆ ಯಾವುದೇ ಅವಕಾಶ ಇಲ್ಲ.

**ಒಂದು ಪ್ರತಿಗಾಮಿ ಹೆಜ್ಜೆ**

ಹತ್ತನೇ ತರಗತಿಯಲ್ಲಿ ಮತ್ತೊಮ್ಮೆ ಬೋರ್ಡ್ ಪರೀಕ್ಷೆಯನ್ನು ಜಾರಿಗೊಳಿಸಿದ್ದು ಶಾಲಾ ಶಿಕ್ಷಣದಲ್ಲಿ ಆಗುತ್ತಿರುವ ಸಾಂಸ್ಥಿಕ ಸುಧಾರಣೆಗೆ ಒಂದು ಭಾರೀ ಧಕ್ಕೆಯೇ ಸರಿ. ಒಂದು ಕಡೆ ಎಲ್ಲ ಸಂಸ್ಥೆಗಳಲ್ಲಿ ಸುಧಾರಣೆಯ ಬಗ್ಗೆ

ಮತುಕತೆ ನಡೆಯುತ್ತಿದ್ದರೆ ಅದೇ ಹೊತ್ತಿನಲ್ಲಿ ಶಿಕ್ಷಣದಲ್ಲಿ ಆಗುತ್ತಿರುವ ಸುಧಾರಣೆಗಳನ್ನು ತಡೆಯುವುದು ಮುಂದಿನ ದಿನಗಳಲ್ಲಿ ಭಾರೀ ಅಪಾಯಕಾರಿಯಾದ್ದು. ಜೊತೆಗೇ ಅನೇಕ ದೃಷ್ಟಿಗಳಿಂದ ಶಿಕ್ಷಕ, ವಿದ್ಯಾರ್ಥಿ ಮತ್ತು ಶಾಲೆಯ ಸ್ವಾತಂತ್ರ್ಯವನ್ನು ಕಿತ್ತುಕೊಳ್ಳುವ ಹೆಜ್ಜೆ ಕೂಡಾ ಹೌದು. ಬೋರ್ಡ್ ಪರೀಕ್ಷೆಯ ಇಂಥ ಸಂದರ್ಭದಲ್ಲಿ ಶಾಲೆಯನ್ನು ಒಂದು ಸ್ವತಂತ್ರ ಶಿಕ್ಷಣ ಕೇಂದ್ರವೆಂಬ ರೂಪದಲ್ಲಿ ಹೇಗೆ ತಾನೆ ಕಲ್ಪಿಸಿಕೊಳ್ಳಲು ಸಾಧ್ಯ?

ನಮ್ಮ ಬಹಳಷ್ಟು ತತ್ವ ಸಿದ್ಧಾಂತಗಳು ನಮ್ಮ ಗ್ರಹಿಕೆಗಳನ್ನವಲಂಬಿಸಿವೆ. ಅವುಗಳಲ್ಲಿ "ಒಳ್ಳೆಯ ಶಿಕ್ಷಣಕ್ಕೆ ಭಯ ಅತ್ಯಂತ ಅಗತ್ಯವೆಂಬುದು" ಒಂದು ಗ್ರಹಿಕೆ. ಆದರೆ ಅದು ತಪ್ಪು ಗ್ರಹಿಕೆ. ಮಕ್ಕಳನ್ನು ಹೆದರಿಸದೆ ಬೋಧಿಸುವ ಶಿಕ್ಷಕರಿಗೆ, ಹೊಸ ಹೊಸ ಪ್ರಯೋಗಗಳನ್ನು ಮಾಡುವ ಶಿಕ್ಷಕರಿಗೆ ಬೋರ್ಡ್ ಪರೀಕ್ಷೆ ಸ್ವಾಗತಾರ್ಹ ಹೆಜ್ಜೆಯಲ್ಲ. ಬೋರ್ಡ್ ಪರೀಕ್ಷೆ ತೆಗೆದು ಹಾಕಿದ ನಂತರದಲ್ಲಿ ಶಿಕ್ಷಣದ ಗುಣಮಟ್ಟದಲ್ಲಿ ಯಾವುದೇ ಭಾರೀ ಕುಸಿತ ಉಂಟಾಗಿರಲಿಲ್ಲವೆಂಬುದನ್ನು ಬೋರ್ಡ್ ಪರೀಕ್ಷೆಗೆ ಸಂಬಂಧಿಸಿದ ಅಂಕಿ ಸಂಖ್ಯೆಗಳು ತಿಳಿಸುತ್ತವೆ. ಬದಲಿಗೆ ತುಳಿತಕ್ಕೊಳಗಾದ ದಮನಕ್ಕೊಳಗಾದ ವರ್ಗಗಳಿಗೆ ಕೆಲಸ ಸಂಪಾದಿಸಿಕೊಳ್ಳಲು ಒಂದು ಪ್ರಮಾಣಪತ್ರದ ಬೆಂಬಲ ದೊರಕಿತ್ತು. ಬೋರ್ಡ್ ಪರೀಕ್ಷೆಯನ್ನು ಮತ್ತೆ ಜಾರಿಗೆ ತರುವುದು ಶಿಕ್ಷಣದಲ್ಲಿ ಆಗುತ್ತಿರುವ ಸಾಂಸ್ಥಿಕ ಬದಲಾವಣೆಯನ್ನು ಕೆಟ್ಟ ರೀತಿಯಲ್ಲಿ ಪ್ರಭಾವಿತಗೊಳಿಸುತ್ತದೆ. ಇದೊಂದು ಪ್ರತಿಗಾಮಿ ಹೆಜ್ಜೆ.

---

**ಮುರಾರೀ ಝಾ ಕಳೆದ ಒಂದು ದಶಕದಿಂದ ಶಿಕ್ಷಣಕ್ಕೆ ಸಂಬಂಧಿಸಿದ ವಿಷಯಗಳ ಬಗ್ಗೆ ಅಧ್ಯಯನ ಮತ್ತು ಲೇಖನಗಳನ್ನು ಬರೆಯುವುದರಲ್ಲಿ ಕ್ರಿಯಾಶೀಲರಾಗಿದ್ದಾರೆ. ಸದ್ಯದಲ್ಲಿ ದೆಹಲಿಯ ಆಡಳಿತ ಸಂಸ್ಥೆಯಲ್ಲಿ ಸಮಾಜ ವಿಜ್ಞಾನದ ಶಿಕ್ಷಕರಾಗಿ ಕಾರ್ಯ ನಿರ್ವಹಿಸುತ್ತಿದ್ದಾರೆ. ಸಂಪರ್ಕ:** murarijha1984@gmail.com